## ಕರ್ನಾಟಕ ವಿಧಾನ ಪರಿಷತ್

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1466
ಸದಸ್ಯರ ಹೆಸರು : ಶ್ರೀ ಪ್ರಕಾಶ್ ಕೆ.ರಾಥೋಡ್ (ನಾಮನಿರ್ದೇಶನ ಹೊಂದಿದವರು)
ಉತ್ತರಿಸುವ ದಿನಾಂಕ : 19.03.2020
ಉತ್ತರಿಸುವ ಸಚಿವರು : ಜಲ ಸಂಪನ್ಮೂಲ ಸಚಿವರು

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಆಲಮಟ್ಟಿ ಅಣೆಕಟ್ಟನ್ನು 524 ಅಡಿಗೆ ಹೆಚ್ಚಿಸುವ ಯೋಜನೆ ಸರ್ಕಾರಕ್ಕಿದೆಯೆ; | ಕೃಷ್ಣಾ ನ್ಯಾಯಾಧೀಕರಣ-2ರ ತೀರ್ಪಿನನ್ವಯ ಕೃಷ್ಣಾ ಮೇಲ್ದಂಡೆ ಯೋಜನೆ ಹಂತ-3ರ ಆಲಮಟ್ಟಿ ಜಲಾಶಯದ ನೀರಿನ ಸಂಗ್ರಹಣೆಯನ್ನು ಆರ್.ಎಲ್ 519.60 ಮೀ. ನಿಂದ ಆರ್.ಎಲ್ 524.256 ಮೀ.ಗೆ (4.656 ಮೀ.) ಎತ್ತರಿಸುವುದಾಗಿರುತ್ತದೆ. |
| ಆ | ಹಾಗಿದ್ದಲ್ಲಿ, ಅಣೆಕಟ್ಟು ಎತ್ತರಿಸುವ ಕಾರ್ಯ ಯಾವ ಹಂತದಲ್ಲಿದೆ; | ಆಲಮಟ್ಟಿ ಜಲಾಶಯದ ಸಂಗ್ರಹಣೆ ಮಟ್ಟ ಆರ್.ಎಲ್. 524.256 ಮೀ. ಎತ್ತರಿಸುವಿಕೆಯು ಕೃಷ್ಣಾ ನ್ಯಾಯಾಧೀಕರಣ-2ರ ಅಂತಿಮ ಐತೀರ್ಪು ಕೇಂದ್ರ ಸರ್ಕಾರದಿಂದ ಹೊರಡಿಸುವ ಅಧಿಸೂಚನೆಗೆ ಒಳಪಟ್ಟಿದ್ದು, ಐತೀರ್ಪು ಇನ್ನೂ ಅಧಿಸೂಚನೆಗೊಂಡಿರುವುದಿಲ್ಲ. |
| ಇ | ಆಲಮಟ್ಟಿ ಅಣೆಕಟ್ಟಿನ ಎತ್ತರವನ್ನು ಹೆಚ್ಚಿಸುವುದರಿಂದ ಮುಳುಗಡೆಯಾಗುವ ಭೂಮಿಯನ್ನು ಸ್ವಾಧೀನ ಪಡಿಸಿಕೊಳ್ಳಲಾಗಿದೆಯೇ; | ಆಲಮಟ್ಟಿ ಜಲಾಶಯದ ನೀರಿನ ಸಂಗ್ರಹಣೆಯನ್ನು ಆರ್.ಎಲ್ 519.60 ಮೀ. ನಿಂದ ಆರ್.ಎಲ್ 524.256 ಮೀ.ಗೆ ಎತ್ತರಿಸುವುದಾಗಿದ್ದು ಜಲಾಶಯದ ಹಿನ್ನೀರಿನಲ್ಲಿ ಸುಮಾರು 188 ಗ್ರಾಮಗಳಿಗೆ ಸಂಬಂಧಿಸಿದಂತೆ ಜಮೀನುಗಳ ಭೂಸ್ವಾಧೀನತೆ ಕೈಗೊಳ್ಳಬೇಕಾಗಿದ್ದು, ವಿವರಗಳು ಈ ಕೆಳಗಿನಂತಿವೆ. |
| ಈ | ಆಲಮಟ್ಟಿ ಅಣೆಕಟ್ಟಿನ ಎತ್ತರದಿಂದ ಮುಳುಗಡೆಯಾಗುವ ಊರು ಹಾಗೂ ಜಮೀನುಗಳ ವಿವರ ಒದಗಿಸುವುದು: | |

| ಅ. ನಂ | ವಿವರ | ಒಟ್ಟು (ಎಕರೆ) |
|---|---|---|
| 1 | 188 ಗ್ರಾಮಗಳಿಗೆ ಸಂಬಂಧಿಸಿದಂತೆ ಮುಳುಗಡೆಯಾಗುವ ಜಮೀನು | 75,563 |
| 2 | 20 ಮುಳುಗಡೆ ಹೊಂದಲಿರುವ ಗ್ರಾಮಗಳಿಗೆ & ಬಾಗಲಕೋಟೆ ಪಟ್ಟಣ ಪುನರ್ ವಸತಿ ಕೇಂದ್ರ ನಿರ್ಮಾಣಕ್ಕಾಗಿ | 6,467 |
| 3 | 9 ಯೋಜನೆಗಳು (ಕಾಲುವೆ ನಿರ್ಮಾಣ) | 51,837 |
| | **ಒಟ್ಟು** | **1,33,867** |

ಇದುವರೆಗೂ ಸುಮಾರು 76,000 ಎಕರೆ ಜಮೀನು ಭೂಸ್ವಾಧೀನತೆಗೆ 11(1) ಪ್ರಾಥಮಿಕ ಅಧಿಸೂಚನೆ ಹೊರಡಿಸಲಾಗಿದ್ದು ಭೂಸ್ವಾಧೀನತೆ ಪ್ರಕ್ರಿಯೆ ಈಗಾಗಲೇ ಪ್ರಾರಂಭಗೊಂಡಿರುತ್ತದೆ. 17,631 ಎಕರೆ ಜಮೀನು ಸ್ವಾಧೀನತೆಗೆ ಐತೀರ್ಪು ಮಾಡಲಾಗಿದೆ. ಇನ್ನುಳಿದ ಭೂಸ್ವಾಧೀನ ಪ್ರಕ್ರಿಯೆ ಮತ್ತು ಪುನರ್‌ವಸತಿ & ಪುನರ್ ನಿರ್ಮಾಣದ ಕ್ರಮಗಳನ್ನು ಹೊಸ ಭೂಸ್ವಾಧೀನ ಕಾಯ್ದೆರನ್ವಯ ಜಾರಿಗೊಳಿಸಲು ಕ್ರಮ ಜರುಗಿಸಲಾಗುತ್ತಿದೆ.

ಮುಳುಗಡೆ ಹೊಂದುವ 20 ಗ್ರಾಮಗಳ ಪುನರ್ ವಸತಿ ಮತ್ತು ಪುನರ್ ನಿರ್ಮಾಣದ ಪ್ರಸ್ತುತ ಹಂತದ ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ.

ಸಂಖ್ಯೆ: ಜಸಂಇ 39 ಡಬ್ಲ್ಯೂಬಿಎಂ 2020

(ರಮೇಶ್ ಲ. ಜಾರಕಿಹೊಳಿ)
ಜಲ ಸಂಪನ್ಮೂಲ ಸಚಿವರು